

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 830
ಸದಸ್ಯರ ಹೆಸರು : ಶ್ರೀ ಎನ್.ರವಿಕುಮಾರ್
ಉತ್ತರಿಸುವ ದಿನಾಂಕ : 17-12-2018
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ವಿದ್ಯಾರ್ಥಿನಿಯರ ಹಾಸ್ಟೆಲ್‌ಗಳಿಗೆ ಕಾವಲುಗಾರರ ವ್ಯವಸ್ಥೆಯನ್ನು ಸರ್ಕಾರ ಮಾಡಿದೆಯೇ; ಇಲ್ಲವಾದಲ್ಲಿ, ಈ ಹಾಸ್ಟೆಲ್‌ಗಳಲ್ಲಿ ವಿದ್ಯಾರ್ಥಿನಿಯರ ರಕ್ಷಣೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಹೌದು. |
| ಆ) | ಸದರಿ ಹಾಸ್ಟೆಲ್‌ಗಳಿಗೆ ಪೋಲೀಸರ ರಾತ್ರಿ ಬೀಟ್ ಸ್ಥಳವೆಂದು ಗುರುತಿಸಲಾಗಿದೆಯೇ; ಈ ರೀತಿಯಾಗಿ ಗುರುತಿಸಿರುವ ಹಾಸ್ಟೆಲ್‌ಗಳ ಸಂಖ್ಯೆ ಎಷ್ಟು; | ಹೌದು.<br>ಇಲಾಖಾ 386 ಹಾಸ್ಟೆಲ್‌ಗಳಿಗೆ ಪೋಲೀಸರ ರಾತ್ರಿ ಬೀಟ್ ಸ್ಥಳವೆಂದು ಗುರುತಿಸಲಾಗಿದೆ. |
| ಇ) | ರಾಜ್ಯದಲ್ಲಿರುವ ವಿದ್ಯಾರ್ಥಿನಿಯರ ಎಷ್ಟು ಹಾಸ್ಟೆಲ್‌ಗಳಲ್ಲಿ ಪುರುಷ ವಾರ್ಡನ್‌ಗಳಿದ್ದಾರೆ; ವಿದ್ಯಾರ್ಥಿನಿಯರ ಹಾಸ್ಟೆಲ್‌ಗಳಿಗೆ ಮಹಿಳಾ ವಾರ್ಡನ್‌ಗಳನ್ನು ನೇಮಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಸಮಾಜ ಕಲ್ಯಾಣ ಇಲಾಖೆಯ 15 ವಿದ್ಯಾರ್ಥಿನಿಯರ ಹಾಸ್ಟೆಲ್‌ಗಳಲ್ಲಿ ಪುರುಷ ವಾರ್ಡನ್‌ಗಳಿದ್ದಾರೆ.<br>ಇಲಾಖೆಯಲ್ಲಿ ಖಾಲಿ ಇರುವ ಪರಿಶಿಷ್ಟ ಜಾತಿಯ 443 ಮತ್ತು ಪರಿಶಿಷ್ಟ ಪಂಗಡದ 38 ವಾರ್ಡನ್ ಹುದ್ದೆಗಳನ್ನು ಕರ್ನಾಟಕ ಲೋಕ ಸೇವಾ ಆಯೋಗದ ಮೂಲಕ ನೇಮಕಾತಿ ಮಾಡಲು ಕ್ರಮ ಕೈಗೊಳ್ಳಲಾಗಿದೆ. ಆಯ್ಕೆ ಪಟ್ಟಿ ಬಂದ ನಂತರ ಮಹಿಳಾ ವಾರ್ಡನ್‌ಗಳನ್ನು ಬಾಲಕಿಯರ ವಿದ್ಯಾರ್ಥಿ ನಿಲಯಗಳಿಗೆ ನಿಯುಕ್ತಿಗೊಳಿಸಲಾಗುವುದು. |
| ಈ) | ರಾಜ್ಯದಲ್ಲಿರುವ ವಿದ್ಯಾರ್ಥಿನಿಯರ ಹಾಸ್ಟೆಲ್‌ಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಹೊಸದಾಗಿ ವಿದ್ಯಾರ್ಥಿನಿಯರ ಹಾಸ್ಟೆಲ್‌ಗಳನ್ನು ತೆರೆಯಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಹೌದು.<br>ಪರಿಶಿಷ್ಟ ಜಾತಿ/ಪಂಗಡದ ವಿದ್ಯಾರ್ಥಿಗಳ ಸಂಖ್ಯೆ, ಆ ಪ್ರದೇಶದಲ್ಲಿನ ಕಾಲೇಜುಗಳ ಸಂಖ್ಯೆ ಮತ್ತು ಬೇಡಿಕೆಗೆ ಅನುಗುಣವಾಗಿ ಪ್ರಾರಂಭಿಸಲು ಪರಿಶೀಲಿಸಲಾಗುವುದು. |

ಸಕಇ 532 ಪಕಸೇ 2018

(ಪ್ರಿಯಾಂಕ್ ಖರ್ಗೆ)
ಸಮಾಜ ಕಲ್ಯಾಣ ಸಚಿವರು.